5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿತರಣೆ ಮಾದರಿ ರೀತ್ಯವೇ ಮಾಡಬೇಕು. ಹಾಗೂ ಅಂದಾಜು ಪಟ್ಟಿಗಳನ್ನು ತಯಾರಿಸಿ ಪಿಡಬ್ಲ್ಯೂಡಿ ಯಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ (ತಾಂತ್ರಿಕ ಪರಿಶೀಲನೆ ವೆಚ್ಚವನ್ನು ಇಲಾಖಾ ವತಿಯಿಂದ ಭರಿಸಲಾಗುವುದು) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.
6. ದಿನಾಂಕಃ 08.07.2004 ಮತ್ತು 15.07.2004ರ ಸಂಜೆ 4.00 ಗಂಟೆ ವೇಳೆಯವರೆಗೆ ಟೆಂಡರ್‌ನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕಬೇಕು.
7. ದಿನಾಂಕಃ 08.07.2004 ಮತ್ತು 15.07.2004ರ ಸಂಜೆ 5.00 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಬೆಂಗಳೂರು ವೃತ್ತ, ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9. ಪಿ.ಡಬ್ಲ್ಯೂ.ಡಿ. ದರಗಳಲ್ಲದ ಕೆಲಸ ವಸ್ತುಗಳಿಗೆ ಡಾಟಾ ಶೀಟ್ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧೀಕ್ಷಕ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ ಮೂರು ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200/- ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.
11. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
12. ಇಎಂಡಿ ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕ್ರಮ ಮುಗಿದ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13. ಯಶಸ್ವಿ ಟೆಂಡರ್‌ದಾರರಿಂದ ಇಎಂಡಿ ಜೊತೆಯಲ್ಲಿ ಶೇಕಡ 10% ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ ಆರು ತಿಂಗಳ ನಂತರ ಹಿಂದಿರುಗಿಸಲಾಗುವುದು.
14. ಪ್ರತಿ ಬಿಲ್‌ನಲ್ಲಿ ಶೇಕಡ 2% ರಷ್ಟನ್ನು ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾರ್ಜನ್ನು ಮತ್ತು ಶೇಕಡ 5% ರಷ್ಟನ್ನು ಮಾರಾಟ ತೆರಿಗೆಯಾಗಿ ನಿಯಮಾನುಸಾರ ಹಿಡಿಯಲಾಗುವುದು.
15. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ವೃತ್ತ, ಬೆಂಗಳೂರು ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
16. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿಡಬ್ಲ್ಯೂಡಿ 2003-04 ನೇ ಸಾಲಿನ ದರಕ್ಕಿಂತ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ನಮೂದಿಸಬೇಕು.
17. ಕೆಲಸದ ಆದೇಶ ನೀಡಿದ ದಿನಾಂಕದಿಂದ ಆರು ತಿಂಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.
18. ಇತರೆ ಇಲಾಖೆಗಳಿಂದ ಅಂದರೆ ಕೆ.ಇ.ಬಿ. ಒಳಚರಂಡಿ, ನಗರ ಪಾಲಿಕೆ ಇಲಾಖೆಯಿಂದ ಕಟ್ಟಡದ ಕಾರ್ಯದ ಸಲುವಾಗಿ ಅನುಮತಿ ನೀಡಿ ಪಡೆಯತಕ್ಕದ್ದು.
19. ಟೆಂಡರ್‌ದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು ಮತ್ತು ಕಟ್ಟಡ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ ನಷ್ಟ ಸಂಭವಿಸಿದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೆ ಹೊಣೆಗಾರರಾಗುತ್ತಾರೆ.
20. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲಿನ ಹಣ ಪಾವತಿಸಲಾಗುವುದು.
21. ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
22. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
23. ಸಾರ್ವತ್ರಿಕ ರಜೆ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
24. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.
25. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು.
26. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗದಿಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳುಃಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.
27. ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರಃದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದು ಕೊಳ್ಳಲಾಗುವುದು.

28. ಟೆಂಡರುದಾರರು ನಿಗಧಿತ ಅವದಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾವತಿಯಿಂದ ಮಾಡಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕೆಲಸದ ಬಗ್ಗೆ ನೀಡಿದ ದೃಢೀಕರಣ ಪತ್ರವೇ ಅಂತಿಮವಾಗಿರುತ್ತದೆ.
29. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು
30. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
31. ಕೆಲಸದಲ್ಲಿ ಏನಾದರೂ ಬದಲಾವಣೆ: ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ಧವಾಗಿರುವುದಿಲ್ಲ.
32. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ದರಾಗಿರುತ್ತಾರೆ.
33. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸುವ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.
34. ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದು ಪಡಿಸುವುದಲ್ಲದೆ, ಇಎಂಡಿ ಮತ್ತು ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
35. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ಕೆಲಸಗಾರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಭರಿಸಿದ್ದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.
36. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸಿದ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.
37. ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.
38. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
39. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.
40. ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ಮಾರಾಟ ತೆರಿಗೆದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
41. ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
42. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
43. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇಎಂಡಿ ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿಯ ಪರಿಹಾರ ನೀಡಲಾಗುವುದಿಲ್ಲ.
44. ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
45. ಪಿಡಬ್ಲ್ಯೂಡಿ ದರಪಟ್ಟಿಯಲ್ಲಿ ನಮೂದಿಸಿರುವಂತೆ, ಉತ್ತಮ ಗುಣಮಟ್ಟದ ಸಾಮಾಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.
46. ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.
47. ನಮೂದಿಸಿದ ದರಗಳಲ್ಲಿ ಸಾಮಾಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.
48. ಉತ್ತಮ ಗುಣಮಟ್ಟದ ಸಾಮಾಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳಗಳಲ್ಲಿ ದಾಸ್ತಾನು ಮಾಡಬೇಕು. ತಿರಸ್ಕೃತವಾದ ಸಾಮಾಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
49. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.
50. ಟೆಂಡರುದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನಾ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.
51. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
52. ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2003-04ನೇ ಸಾಲಿನ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಲ್ಲಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2003-04ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ ಸದರಿ ಕೆಲಸ ಮುಂದುವರಿಯಬಾರದು. ಕಾರ್ಯಾದೇಶ

ಪಡೆದ ಅಂದರೆ ಆರು ತಿಂಗಳ ಗಡುವಿನೊಳಗೆ 2003-04ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯ ನಿರ್ವಹಿಸಬೇಕಾಗಿರುತ್ತದೆ.

53. ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.

54. ಕರ್ನಾಟಕ ಮಾರಾಟ ತೆರಿಗೆಯ ಅಡಿಯಲ್ಲಿ ನೋಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ. ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (Sales Tax Clearance Certificate) ಲಗತ್ತಿಸಬೇಕು.

55. ಇಲಾಖೆಯ ಉಸ್ತುವಾರಿಯಲ್ಲಿ ಮಂಜೂರಾದ ಅಂದಾಜುಪಟ್ಟಿ ಮತ್ತು ನಕಾಶೆಯಂತೆ ಕಾಮಗಾರಿಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವುದು. ಕಳಪೆ ಸಾಮಾಗ್ರಿಗಳನ್ನು ಉಪಯೋಗಿಸಬಾರದು. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ತೆಗೆದುಕೊಳ್ಳುವ ಕಾಮಗಾರಿಯ ಅಳತೆ ಅಂತಿಮವಾಗಿದ್ದು ನ್ಯೂನತೆ ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ನಿರ್ಣಯ ಅಂತಿಮವಾಗುವುದೆಂದು ಭಾವಿಸತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಬೆಂಗಳೂರು ನಗರ ವಿಭಾಗ, ಬೆಂಗಳೂರು

PR-298

**IN THE COURT OF THE ADDL. CITY CIVIL JUDGE, BANGALORE**
**(CCH 11) P& S.C. NO.184/2002**

**BETWEEN:**

1. Sri. Ramaiah S/o Muniswamappa, Aged about 70 years, R/at No. 23, Krishna Singh Galli, Cubbonpet, Bangalore.
2. Smt. Jayamma W/o Ramaiah, Aged about 60 years, R/at No. 23, Krishna Singh Galli, Cubbonpet, Bangalore.
3. Sri. R. Krishna S/o Ramaiah, Aged about 47 years, R/at No. 76-13, Uttregowda Street, Akkithimmanahalli, (Shanthinagar), Bangalore-560027
4. Sri. Hanumanthappa S/o Ramaiah, Aged about 38 years, R/at Konnaghatta, Kasaba Hobli, Doddaballapur Taluk, Bangalore Rural District.
5. Smt. Sunandamma W/o Venkateshappa, Aged about 42 years, R/at Sarakki Thota, (Near Siddalingeshwara Tent), J.P. Nagar, Bangalore.
6. Smt. Parvathamma W/o Narayana Swamy, Aged about 28 years, R/at Malur, Siddlaghatta Taluk, Kolar District.

**Petitioners.**

**AND:**

The Manager, Karnataka Bank Ltd., K.G. Road and City Civil Court, Extension Counter, Bangalore-560009. **Respondent:**

Whareas, the petitioners have filed the above petition under section 372 of the Indian Succession Act, for seeking Succession Certificate for the Fixed Deposit amount of Rs. 5,90,654-00

The Hon'ble Court has fixed the date of hearing of the above petition on 12.7.2004

It is submitted that the deceased Gowramma is the sister of 3rd Petitioner, Manjula and Vanitha are the 3rd petitioner's sister's daughters. It is further stated that the 1st petitioner is the father of deceased Gowramma and grand father of deceased Manjula and Vanitha. The petitioner No. 2 is the wife of 1st petitioner and grand mother of deceased Manjula and Vanitha. The petitioner Nos. 4 to 6 are brother and sisters of the deceased Gowramma and nice to deceased Manjula and Vanitha.

It is further submitted that Gowramma passed away on 18.05.2001 and her daughters Manjula and Vanitha were died on 29.04.2002 and 25.04.2002 respectively. The 3rd petitioner's sister and her daughters have died intestate and left fixed deposit bonds without any reference and the petitioners are only the legal heirs of deceased Gowramma and her daughters Kum. Manjula and Kum. Vanitha.

It is further submitted that the amount in fixed deposits are with Karnataka Bank Limited, City Civil Court Extension Counter, Bangalore-9 vide FDR Nos. 156378 for Rs. 1,00,000/- in the name of deceased Gowramma, FDR No. 156377 for Rs.2,32,471/- in the name of deceased Manjula, FDR No. 156379 for Rs.2,31,471/- in the name of deceased Vanitha and FDR No. 020075 for Rs. 13,856/- in the name of deceased Manjula and FDR No. 020076 for Rs.13,856/- in the name of deceased Vanitha. The said amounts are deposited by the Insurance Company in respect of compliance of the award amount.

Any other legal representatives of the deceased who are having any interest or objection for the same may enter appearance and file objections on the day fixed for hearing failing which, the Court shall proceed to dispose the above petition in accordance with law.

Given under my hand and seal of the Court 16th Day of June 2004

By Order of The Court,
Assistant Registrar,
City Civil Court, Bangalore.

PD-56

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಂಖ್ಯೆ. 1, ನೀರಾವರಿ ತನಿಖಾ ವಿಭಾಗ, ಮೈಸೂರು-570020

### ಅಲ್ಪಾವಧಿಯ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ

### 2ನೇ ಕರೆ

**ವಿಷಯ :** ಸಂಖ್ಯೆ: 1, ನೀರಾವರಿ ತನಿಖಾ ವಿಭಾಗ, ಮೈಸೂರು ಇಲ್ಲಿ ಲಭ್ಯವಿರುವ ಅನುಪಯುಕ್ತ ವಾಹನ ಪೆಟ್ರೋಲ್ ಜೀಪ್ ಸಂಖ್ಯೆ: ಎಂ.ಇ.ಎ. 5348ರ ಟೆಂಡರ್-ಕಂ-ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ವಿಭಾಗಕ್ಕೆ ಸೇರಿದ ಈ ಕೆಳಗೆ ನಮೂದಿಸಿರುವ ಅನುಪಯುಕ್ತವಾದ ವಾಹನ ಜೀಪು ಸಂಖ್ಯೆ: ಎಂ.ಇ.ಎ. 5348 ಎಲ್ಲಿದೆಯೋ ಅಲ್ಲಿ ಹೇಗಿದೆಯೋ ಹಾಗೆ ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

ಈ ಅನುಪಯುಕ್ತ ವಾಹನವನ್ನು ಖರೀದಿಸಲು ಇಚ್ಛಿಸುವವರು ಈ ಕೆಳಕಂಡ ಷರತ್ತಿನೊಂದಿಗೆ ದಿನಾಂಕ: 14.7.2004 ರಂದು ಟೆಂಡರ್-ಕಂ-ಬಹಿರಂಗ ಹರಾಜು ಪ್ರಕ್ರಿಯೆಯಲ್ಲಿ ಭಾಗವಹಿಸಬಹುದು.

| ಕ್ರ. ಸಂ. | ವಿಲೇವಾರಿ ಮಾಡುವ ಅನುಪಯುಕ್ತ ವಾಹನ ಸವಿವರ. | ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಸಲ್ಲಿಸಬೇಕಾದ ಇಎಂಡಿ ಹಣ | ಟೆಂಡರ್ ಫಾರಂ ಬೆಲೆ | ಟೆಂಡರ್ ನಮೂನೆಗಳನ್ನು ಪಡೆಯಲು ಅರ್ಜಿಸಲ್ಲಿಸುವ ಕಡೇ ದಿನಾಂಕ | ಟೆಂಡರ್ ನಮೂನೆ ಗಳನ್ನು ವಿತರಿಸುವ ದಿನಾಂಕ | ಭರ್ತಿಮಾಡಿದ ಟೆಂಡರ್ ಸಲ್ಲಿಸುವ ಕಡೇ ದಿನಾಂಕ |
|---|---|---|---|---|---|---|
| 1) | ಪೆಟ್ರೋಲ್ ಜೀಪ್ ಸಂಖ್ಯೆ: ಎಂ.ಇ.ಎ. 5348 | ರೂಪಾಯಿ 3,000-00 | ರೂಪಾಯಿ 100-00 | 12.7.2004 | 13.7.04 | 14.07.04 |

ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ಪಿ.ಆರ್. 296 ಕಾರ್ಯಪಾಲಕ ಇಂಜಿನಿಯರ್, ನಂ.1, ನೀರಾವರಿ ತನಿಖಾ ವಿಭಾಗ, ಮೈಸೂರು.

## ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ ಸಂಖ್ಯೆ: ಲೆಕ್ಕ (2) ಎಂ.ಟಿ: 114:04-05 ದಿನಾಂಕ: 20ನೇ ಜೂನ್ 2004

**ವಿಷಯ :** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನ ಸಂಖ್ಯೆ ಸಿ.ಎ.ಜಿ. 9133 ಜೀಪನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ: 6/ ಟಿ.ಸಿ.ಇ. 87 ದಿನಾಂಕ: 15.12.92

2. ಪ್ರಧಾನ ಕಛೇರಿ ಬೆಂಗಳೂರು ರವರ ಪತ್ರ ಸಂಖ್ಯೆ ವಾ.ಸಾ (1) 71/2002-03 ದಿನಾಂಕ: 13.5.04

ತುಮಕೂರು ಜಿಲ್ಲೆಯ ವಾಹನ ಸಂಖ್ಯೆ ಸಿ.ಎ.ಜಿ. 9133 ಜೀಪನ್ನು ನಿರುಪಯುಕ್ತ ವಾಹನವೆಂದು ಘೋಷಿಸಲಾಗಿದ್ದು, ಸದರಿ ವಾಹನವನ್ನು ದಿನಾಂಕ: 5.8.04 ರಂದು ಬೆಳಿಗ್ಗೆ 10:30 ಘಂಟೆಗೆ ತುಮಕೂರಿನ ಬಟವಾಡಿಯಲ್ಲಿರುವ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ ಸಾರ್ವಜನಿಕರ ಸಮಕ್ಷಮ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ, ವಾಹನವನ್ನು ಖರೀದಿಸಬಹುದಾಗಿರುತ್ತದೆ.

**ಹರಾಜಿನ ವಾಹನದ ವಿವರಗಳು**

| ಕ್ರ. ಸಂ. | ವಾಹನ ನೋಂದಣಿ ಸಂಖ್ಯೆ | ಮಾದರಿ | ತಯಾರಿಸಿದ ವರ್ಷ |
|---|---|---|---|
| 1 | ಸಿ.ಎ.ಜಿ-9133 | ಜೀಪ್ | 1982 |

ಈ ಮೇಲ್ಕಂಡ ವಾಹನವನ್ನು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್/ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು/ ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.1000.00 ಡಿ.ಡಿ. ಅಥವಾ ನಗದು ರೂಪದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ವೆಚ್ಚವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು ದಿನಾಂಕ: 3.8.2004 ರಂದು ಸಂಜೆ 5.00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಜಿಲ್ಲಾ ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್/ ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗ ಪಡಿಸುವುದು ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್/ ಸವಾಲುದಾರರು ವಾಹನದ ಒಟ್ಟೂ ಬೆಲೆಯ ಶೇ. 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು ಸದರಿ ವಾಹನದ ಅತೀ ಹೆಚ್ಚಿನ ಟೆಂಡರ್/ ಸವಾಲಿನ ಮೊತ್ತವನ್ನು ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಶೇ. 75 ರಷ್ಟು ಹಣ ಮತ್ತು ತೆರಿಗೆಯನ್ನು ಪಾವತಿ ಮಾಡಿ ಒಂದು ತಿಂಗಳ ಒಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು ತಪ್ಪಿದರೆ ಮುಂಗಡವಾಗಿ ಕಟ್ಟಿದ ಶೇ. 75 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ತುಮಕೂರು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್/ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.
12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್/ ಸವಾಲುದಾರರು ಮುಂಗಡವಾಗಿ ಕಟ್ಟಿಡಲಾದ (ಇ.ಎಂ.ಡಿ) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್/ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್/ ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ತುಮಕೂರಿನ ಬಟವಾಡಿಯಲ್ಲಿರುವ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಡಿ.ಎ.ಆರ್, ಡಿ.ಎಸ್.ಪಿ. ರವರನ್ನು ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

ಪಿ.ಆರ್. 297 ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು.

## ಕರ್ನಾಟಕ ಲೋಕಾಯುಕ್ತ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಲೋಕ್:ಸಿಬ್ಬಂದಿ (1)4:2003-04 ದಿನಾಂಕ: 17ನೇ ಜೂನ್ 2004**

**ವಿಷಯ :** ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ವೃಂದದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 17/19.5.2003
2. KSCS (Unfilled vacancies reserved for the persons belonging to the Schedule Castes and Schedule Tribes) (Special Recruitment) Rules 2001.
3. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 19.3.2004

ಉಲ್ಲೇಖ (3)ರಲ್ಲಿರುವ ಅಧಿಸೂಚನೆಯಲ್ಲಿ ಈ ಸಂಸ್ಥೆಯಲ್ಲಿ ಖಾಲಿಯಿರುವ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ವೃಂದದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರನೇಮಕಾತಿಯಿಂದ ತುಂಬುವ ಸಂಬಂಧ ಈ ಕೆಳಕಂಡ ಅಭ್ಯರ್ಥಿಗಳನ್ನು ತಾತ್ಕಾಲಿಕ ಮುಖ್ಯ ಆಯ್ಕೆ ಪಟ್ಟಿಯಲ್ಲಿ ಆಯ್ಕೆ ಮಾಡಲಾಗಿತ್ತು. ಸಂಬಂಧಪಟ್ಟ ಅಭ್ಯರ್ಥಿಗಳ ಶೈಕ್ಷಣಿಕ ಜಾತಿ ಮತ್ತು ನಡತೆಗಳ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ವರದಿ ತರಿಸಲಾಗಿ ಅವೆಲ್ಲವುಗಳು ಸಮರ್ಪಕವಾಗಿವೆ ಎಂದು ತಿಳಿದುಬಂದಿರುತ್ತದೆ. ಆದ್ದರಿಂದ, ಈ ಕೆಳಕಂಡ ತಾತ್ಕಾಲಿಕ ಮುಖ್ಯ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳನ್ನು ಮುಖ್ಯ ಆಯ್ಕೆಪಟ್ಟಿಯಲ್ಲಿ ಅಂತಿಮ ಆಯ್ಕೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಹುಟ್ಟಿದ ದಿನಾಂಕ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಯು ಪಡೆದ ಒಟ್ಟು ಶೇಕಡಾವಾರು ಅಂಕ | ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| **ಶೀಘ್ರಲಿಪಿಗಾರರ ಹುದ್ದೆಯ ಮುಖ್ಯ ಪಟ್ಟಿಯಲ್ಲಿ ಅಂತಿಮ ಆಯ್ಕೆ** | | | | |
| 1 | ಸಿದರಾಮ ಬಸಪ್ಪ<br>ರಾಮರಥ, ಎ/ಪಿ ಯರನಾಳ, ತಾ: ಬಸವನ ಬಾಗೇವಾಡಿ, ಜಿಲ್ಲಾ: ಬಿಜಾಪುರ-586120 | 01.05.1983 | 61.73 | ಪರಿಶಿಷ್ಟ ಜಾತಿ (ಗ್ರಾಮೀಣ) |

| 1 | 2 | 3 | 4 | 5 |
|---|---|---|---|---|
| 2 | ಲಕ್ಷ್ಮೀ ಎನ್.<br>ನಂ.23, ಮುನಿಸ್ವಾಮಪ್ಪ ರೋಡ್, ಮುನಿರೆಡ್ಡಿ ಪಾಳ್ಯ, ಜೆ.ಸಿ.ನಗರ, ಬೆಂಗಳೂರು-560006 | 14.12.1978 | 60.73 | ಪರಿಶಿಷ್ಟ ಜಾತಿ (ಮಹಿಳೆ) |
| 3 | ಎಸ್. ಸುಲಕ್ಷಣ<br>ತಂದೆ ಶಿವಮೂರ್ತಿ ಎ.ಡಿ., ಎಲ್.ಐ.ಜಿ-62 ಕೆ.ಹೆಚ್.ಬಿ. ಕಾಲೋನಿ, ವಿನೋಭಾನಗರ, ಶಿವಮೊಗ್ಗ | 03.03.1976 | 55.47 | ಪರಿಶಿಷ್ಟ ಜಾತಿ (ಮಹಿಳೆ) |
| **ಬೆರಳಚ್ಚುಗಾರರ ಹುದ್ದೆಯ ಮುಖ್ಯ ಪಟ್ಟಿಯಲ್ಲಿ ಅಂತಿಮ ಆಯ್ಕೆ** | | | | |
| 1 | ಸಂಪತ್ ಕುಮಾರಿ,<br>ತಂದೆ ಶರಣಪ್ಪ ಮೂಲಭಾರತಿ, ಮನೆ ನಂ.2/495, ಜಗತ್ ಭೀಮಾನಗರ, ಗುಲ್ಬರ್ಗಾ. | 01.06.1971 | 72.06 | ಪರಿಶಿಷ್ಟ ಜಾತಿ (ಸಾಮಾನ್ಯ) |

ಪಿ.ಆರ್. 299 ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿಯವರ ಕಛೇರಿ, ಹಾಸನ ಜಿಲ್ಲೆ, ಹಾಸನ

## ಬಹಿರಂಗ ಹರಾಜು ಪ್ರಕಟಣೆ ಅಧಿಸೂಚನೆ

**ಸಂಖ್ಯೆ: ಕಾಕಕೇಹಾ:ಇಎಸ್‌ಟಿ:ಸಿಆರ್-5:2004-05 ದಿನಾಂಕ: 22ನೇ ಜೂನ್ 2004**

**ವಿಷಯ :** ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಹಾಸನ ಕಾರ್ಮಿಕ ಕಲ್ಯಾಣ ಕೇಂದ್ರದ ನಿರುಪಯುಕ್ತ ಪೀಠೋಪಕರಣ, ಹೊಲಿಗೆ ಯಂತ್ರ, ಆಟಿಕೆ ಸಾಮಗ್ರಿಗಳನ್ನು ಹಾಗೂ ಇತರೆ ಸಾಮಗ್ರಿಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಮಂಜೂರಾತಿ ಪತ್ರದ ಸಂ: ಕಾಇ: 103 ಎಲ್‌ಇಟಿ: 2004, ದಿನಾಂಕ: 13.4.2004.
2. ಮಾನ್ಯ ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರ ಕಛೇರಿ ಆದೇಶ ಸಂ:ಕಾಕನಿ: ಆಡಳಿತ-1: ಸಿಆರ್-72:03-04, ದಿನಾಂಕ: 13.4.2004.

ಉಲ್ಲೇಖದಲ್ಲಿ ತಿಳಿಸಿರುವ ಸರ್ಕಾರದ ಆದೇಶದ ಪ್ರಕಾರ, ಹಾಸನ ಕಾರ್ಮಿಕ ಕಲ್ಯಾಣ ಕೇಂದ್ರಕ್ಕೆ ಸಂಬಂಧಪಟ್ಟ ಅನುಬಂಧದಲ್ಲಿ ತೋರಿಸಿರುವ ಅನುಪಯುಕ್ತ ಪೀಠೋಪಕರಣ ಹಾಗೂ ಇತರೆ ಸಾಮಗ್ರಿಗಳನ್ನು ದಿನಾಂಕ: 17.8.2004 ರಂದು ಬೆಳಿಗ್ಗೆ 11.00 ಗಂಟೆಗೆ ಉಪಕಾರ್ಮಿಕ ಆಯುಕ್ತರವರ ಕಛೇರಿ, ನಂ.1086, ಬಸವಕೃಪ, 10ನೇ ಕ್ರಾಸ್, ಕೆ.ಆರ್. ಪುರಂ, ಹಾಸನ, ಇವರ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ಯಾವ ರೀತಿ ಇದೆಯೋ ಅದೇ ರೀತಿ ವಿಲೇವಾರಿ ಮಾಡಲಾಗುವುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

**ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು**

| ಕ್ರ. ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| **I** | **ಹೊಲಿಗೆ ಯಂತ್ರಗಳು:** | | | |
| 1) | ಹೊಲಿಗೆ ಯಂತ್ರಗಳು | 3 | 5 | 8 |
| 2) | ಅಳತೆ ಟೇಪು | 1 | - | 1 |
| 3) | ಕತ್ತರಿ | 1 | 2 | 3 |
| 4) | ಬಾಬಿನ್ಸ್ | 3 | 3 | 6 |
| 5) | ಹೊಲಿಗೆ ಯಂತ್ರದ ಕವರ್ | - | 2 | 2 |
| **II** | **ಕ್ರೀಡಾ ಸಾಮಗ್ರಿಗಳು:** | | | |
| 1) | ಕೇರಂ ಬೋರ್ಡುಗಳು | 2 | 6 | 8 |
| 2) | ಕೇರಂ ಪಾನ್ಸ್ + ಚೆಸ್‌ಬೋರ್ಡ್ | - | 2 | 2 |
| 3) | ಹಾವು ಏಣಿ ಆಟ | - | 2 | 2 |
| 4) | ಲೂಡೋ | - | 2 | 2 |
| 5) | ಟೈನಿಸ್ ಚಕ್ಕಾರ್ | - | 1 | 1 |
| 6) | ಗೂಂಟೆಗಳು | - | 2 | 2 |
| **III** | | | | |
| 7) | ಕೇರಂ ಪಾನ್ಸ್ | 2 | 2 | 4 |
| 8) | ಕೇರಂ ಸ್ಟ್ರೈಕರ್ | 1 | 3 | 4 |
| 9) | ವಾಲಿಬಾಲ್ | 1 | 1 | 2 |
| 10) | ವಾಲಿಬಾಲ್ ನೆಟ್ | 1 | - | 1 |
| 11) | ಫುಟ್‌ಬಾಲ್ | 1 | 1 | 2 |
| 12) | ಟೆನಿಕಾಯ್ಟ್‌ರಿಂಗ್ | 2 | 3 | 5 |
| 13) | ಸ್ಕಿಪ್ಪಿಂಗ್ ಹಗ್ಗ | 5 | - | 5 |

| ಕ್ರ. ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| I | **ಗ್ರಂಥಾಲಯ ಪುಸ್ತಕಗಳು:** | | | |
| 1) | ಕನ್ನಡ ಪುಸ್ತಕಗಳು | 446 | 148 | 594 |
| 2) | ಇಂಗ್ಲೀಷ್ ಪುಸ್ತಕಗಳು | 23 | - | 23 |
| 3) | ಉರ್ದು ಪುಸ್ತಕಗಳು | 8 | - | 08 |
| I | **ಮನರಂಜನೆ ಸಾಮಗ್ರಿಗಳು:** | | | |
| 1) | ವಿಡಿಯೋಕಾನ್ ಕಲರ್ ಟಿ. ವಿ. | - | 1 | 1 |
| 2) | ಸ್ಟೆಬಿಲೈಸರ್ | - | 1 | 1 |
| 3) | ಆಂಟೀನಾ ಮತ್ತು ವೈರ್ | - | 1 | 1 |
| 4) | ತಬಲಾ ಮತ್ತು ಡಗ್ಗ | - | 1 | 1 |
| 5) | ಹಾರ್ಮೋನಿಯಂ | - | 1 | 1 |

**ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರನು ರೂ. 2000-00 ಗಳನ್ನು ಈ ಕಛೇರಿಯಲ್ಲಿ ಮುಂಗಡವಾಗಿ ಬಹಿರಂಗ ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಗೆ ಠೇವಣಿ ಮಾಡಿ ನಂತರ ಹರಾಜಿನಲ್ಲಿ ಭಾಗವಹಿಸಬಹುದು. ಠೇವಣಿ ಮಾಡಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
2. ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರಿಂದ ನೇಮಿಸಲ್ಪಟ್ಟ ಕಾರ್ಮಿಕ ಅಧಿಕಾರಿ, ಹಾಸನ ಇವರು ಬಹಿರಂಗ ಹರಾಜು ನಡೆಸುವ ಅಧಿಕಾರ ಹೊಂದಿರುತ್ತಾರೆ.
3. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತಕ್ಕೆ ಕರೆದಂತಹ ಸವಾಲುದಾರನನ್ನು ಯಶಸ್ವಿ ಸವಾಲುದಾರನೆಂದು ಪರಿಗಣಿಸಲಾಗುವುದು.
4. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಗೆ ಕೂಗಿದ ಹರಾಜುದಾರನು, ಹರಾಜಿನಲ್ಲಿ ಕೂಗಿದ ಒಟ್ಟು ಮೊತ್ತದ ಶೇಕಡ 25ರಷ್ಟು ಮೊತ್ತವನ್ನು ಸ್ಥಳದಲ್ಲಿಯೇ ನಗದಾಗಿ ಪಾವತಿಸಬೇಕು (ಠೇವಣಿ ಮೊತ್ತವನ್ನು ಹೊರತುಪಡಿಸಿ). ಸದರಿ ಹರಾಜನ್ನು ಅಧಿಕಾರಿಗಳು ಅಂಗೀಕರಿಸಲ್ಪಟ್ಟು ನಂತರ ಉಳಿದ ಶೇಕಡ 75ರಷ್ಟು ಮೊತ್ತವನ್ನು ನಗದಾಗಿ ಪಾವತಿಸಿದ ನಂತರ ತಮ್ಮ ಸ್ವಂತ ಖರ್ಚಿನಿಂದ ಹಾಗೂ 7 ದಿನಗಳೊಳಗಾಗಿ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು.
5. ಎಲ್ಲಾ ಹಣವನ್ನು ಕಾರ್ಮಿಕ ಅಧಿಕಾರಿ, ಹಾಸನ, ಇವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು: ಡಿ.ಡಿ.ಗಳನ್ನು ಸ್ವೀಕರಿಸಲಾಗುವುದಿಲ್ಲ.
6. ಮಾರಾಟ ತೆರಿಗೆಯನ್ನು ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಇತರೆ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲು ಮಾಡಲಾಗುವುದು.
7. ಬಹಿರಂಗ ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಮಿಕ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
8. ಬಹಿರಂಗ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಕರೆದಿರುವುದನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಮಿಕ ಅಧಿಕಾರಿಗಳು, ಹಾಸನ, ಇವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
9. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜು ಮಾಡಲಿಕ್ಕಿರುವ ಸಾಮಗ್ರಿಗಳನ್ನು ಹೇಗಿದೆಯೋ ಹಾಗೇ ಇರುವ ಸ್ಥಿತಿಯಲ್ಲಿ ಉಪಕಾರ್ಮಿಕ ಆಯುಕ್ತರು, ಹಾಸನ ಪ್ರಾದೇಶಿಕ, ಹಾಸನ, ಕಛೇರಿ ನಂ.1086, ಬಸವಕೃಪಾ, 10ನೇ ಕ್ರಾಸ್, ಕೆ.ಆರ್.ಪುರಂ, ಹಾಸನ, ಇವರ ಕಛೇರಿಯಲ್ಲಿ ಬಿಡ್ಡು ಕರೆಯುವ ದಿನಾಂಕಕ್ಕಿಂತಲೂ ಮುಂಚಿತವಾಗಿ ನೋಡಬಹುದಾಗಿರುತ್ತದೆ.
10. ಬಹಿರಂಗ ಹರಾಜು ಮುಗಿದ ನಂತರ ಯಶಸ್ವಿಯಾಗದ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಸ್ಥಳದಲ್ಲಿ ಹಿಂದಿರುಗಿಸಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 300 ಕಾರ್ಮಿಕ ಅಧಿಕಾರಿ, ಹಾಸನ ಜಿಲ್ಲೆ, ಹಾಸನ.

**IN THE COURT OF THE IV ADDL. CITY CIVIL JUDGE: MAYOHALL BANGALORE**
**P.N.MAYOHALL HG:05/07/2004 P&S.C.No.15021/2004**

**Petitioners :**
1. H.L. Govindaraju, aged about 57 years S/o Late H.K. Lakshminarasimha Iyengar,
2. H. L. Parthasarathy, aged about 54 years S/o Late H. K. Lakshminarasimha Iyengar,
3. H. L. Parashuram, aged about 60 years S/o Late H. K. Lakshminarasimha Iyengar,

All are Residing at No. 34, Kasturi, Serpentine Road, Kumara Park West, Bangalore-560 020.

V/S

**Respondent :** NIL.

**PUBLIC NOTICE**

Notice is hereby given that a petition have been made to this court under Sec. 372 of the Indian Succession Act, for grant of succession certificate in respect of the debts and securities of the deceased Late H. L. Vijayalakshmi, who died on 28.8.2003 at Bangalore.

Be it know that no caveat has been entered and the said petition is posted for hearing on 5.7.2004 all persons claiming to have any interest in the Assets of the deceased may come and see the proceeding before grant of succession certificate.

Given under my hand and the seal of the Court, this the 18.6.04.

By Order of the Court,

PD-57 Asst. Registrar, City Civil Court, Mayohall unit, Bangalore.